# ಶ್ರೀ ಕೃಷ್ಣಾರ್ಯ ಸ್ತೋತ್ರಮ್

ಶ್ರೀ ರಾಮ ಭಕ್ತ ತದ್ಭಕ್ತ ನಿಷ್ಠೋಽಯಂ ಕೃಷ್ಣಸಂಜ್ಞಕಃ ।
ಶ್ರೀ ಇಭರಾಮಪುರೇಜಾತೋ ಭೂಯಾನ್ಮೇ ಕಾಮಧುಗ್ಗುರುಃ ॥ ೧ ॥

ಶ್ರೀ ರಾಮದೇವರ ಭಕ್ತರು ಮತ್ತು ಅವರ ಭಕ್ತರಲ್ಲಿ ನಿಷ್ಠರಾದ, ಕಾಮಧೇನು ವಿನಂತೆ ಕಂಗೊಳಿಸುವ ಇಭರಾಮಪುರದ ಶ್ರೀ ಕೃಷ್ಣಾಚಾರ್ಯರೆಂಬ ಗುರುಗಳು ನಮಗೆ ಅನುಗ್ರಹಪ್ರದರಾಗಿರಲಿ.

ಶ್ರೀ ರಾಮಚರಣ ದ್ವಂದ್ವ ವಾರ್ಧಿಚಂದ್ರೋದಯೋಪಮಃ ।
ಶ್ರೀ ಕೃಷ್ಣಪೂಜಾ ನಿರತಃ ಕೃಷ್ಣೋ ಮಾಂ ಸರ್ವದಾವತು ॥ ೨ ॥

ಶ್ರೀ ರಾಮನ ಚರಣ ದ್ವಂದ್ವವೆಂಬ ಸಮುದ್ರದಲ್ಲಿ ಚಂದ್ರೋದಯವಾದಂತೆ, ಶ್ರೀ ಕೃಷ್ಣನ ಪೂಜೆಯಲ್ಲಿ ನಿರತರಾದ ಶ್ರೀ ಕೃಷ್ಣಾಚಾರ್ಯರು ನಮ್ಮನ್ನು ಸರ್ವಕಾಲದಲ್ಲಿ ರಕ್ಷಿಸಲಿ.

ಶ್ರೀ ಸಮೀರಪದಾಂಭೋಜ ಷಟ್ಪದೋ ಅಮರ ಶಕ್ತಿಮಾನ್ ।
ಅತೀತಾನಾಗತಜ್ಞಾನೀ ಸಕೃಷ್ಣೋ ಮಾಂ ಸದಾವತು ॥ ೩ ॥

ಶ್ರೀ ವಾಯುದೇವರ ಪಾದ ಪದ್ಮಗಳಲ್ಲಿ ದುಂಬಿಯಂತೆ ವಿಹರಿಸುವ, ಅಮರ ಶಕ್ತರೂ, ತ್ರಿಕಾಲಜ್ಞಾನಿಗಳೂ ಆಗಿ ಪ್ರಸಿದ್ಧರಾಗಿರುವ ಶ್ರೀ ಕೃಷ್ಣಾಚಾರ್ಯರು ನಮ್ಮನ್ನು ಸದಾ ರಕ್ಷಿಸಲಿ.

ಶ್ರೀಸಮೀರಮತಾಂಬೋಧಿ ಮಗ್ನಾನಾಂ ಪುಣ್ಯ ಕರ್ಮಣಾಂ ।
ಭೂಸುರಾಣಾಂ ಪಾದಕಂಜೇ ರತಃ ಕೃಷ್ಣಃ ಸದಾವತು ॥ ೪ ॥

ಶ್ರೀಮನ್ಮಧ್ವ ಶಾಸ್ತ್ರಾಂಬುಧಿಯಲ್ಲಿ ಮಗ್ನರಾಗಿ, ಸದಾ ಸತ್ಸಾಧನನಿರತರಾದ ದ್ವಿಜೋತ್ತಮರ ಪಾದ ಕಮಲಗಳಲ್ಲಿ ಆಸಕ್ತಿ ಹೊಂದಿರುವ ಶ್ರೀ ಕೃಷ್ಣಾಚಾರ್ಯ ಗುರುವರ್ಯರು ನಮ್ಮನ್ನು ನಿರಂತರ ರಕ್ಷಿಸಲಿ.

**ಯತ್ ಸ್ಪೃಷ್ಟ ಧೂಪ ಧೂಮಸ್ಯ ಸೇವನಾದ್ರೋಗ ಜಾತಯಃ।**
**ತಕ್ಷಣಾದೇವ ನಶ್ಯಂತಿ ಸ ಕೃಷ್ಣೋ ಮಾಂ ಸದಾವತು ॥ ೫ ॥**

ಯಾವ ಗುರುಗಳು ಸ್ಪರ್ಷ ಮಾಡಲ್ಪಟ್ಟಿರತಕ್ಕ ಧೂಪದ ಧೂಮವನ್ನು ಸೇವಿಸುವ ಮಾತ್ರದಿಂದಲೇ ಸಮಸ್ತ ರೋಗ ಸಮೂಹಗಳು ನಾಶ ಹೊಂದುತ್ತವೆಯೋ ಅಂಥ ಶ್ರೀ ಕೃಷ್ಣಾಚಾರ್ಯರು ನಮ್ಮನ್ನು ಸದಾ ರಕ್ಷಿಸಲಿ.

**ಯಸ್ಯ ದೇವೋ ಭಾರತೀಶಃ ತದ್ವದಿಷ್ಟಪ್ರದಾಯಕಃ।**
**ಅದೃಷ್ಟಾಸಕ್ತ ದೋಷಾಶ್ಚ ಸ ಕೃಷ್ಣೋ ಮಾಂ ಸದಾವತು ॥ ೬ ॥**

ಯಾವ ಗುರುಗಳು ದೋಷವರ್ಜಿತರಾಗಿ ತಮ್ಮ ಇಷ್ಟ ದೇವರಾದ ಭಾರತೀಪತಿಯ ಸಂಕಲ್ಪಾನುಸಾರ ಭಕ್ತರಿಗೆ ಇಷ್ಟಾರ್ಥಗಳನ್ನು ನೀಡುವರೆಂದು ಪ್ರಸಿದ್ಧರಾಗಿರುವರೋ ಅಂಥ ಶ್ರೀ ಕೃಷ್ಣಾಚಾರ್ಯರು ನಮ್ಮನ್ನು ಸದಾ ರಕ್ಷಿಸಲಿ.

**ಯಸ್ಯ ದೇಹೋಽತಿ ಸೌರಭ್ಯ ಪೂರಿತೋತಿ ಸುಲಕ್ಷ್ಮವಾನ್।**
**ಫಣಿರಾಡಿವ ಯೋವಕ್ತಾ ಸ ಕೃಷ್ಣೋ ಮಾಂ ಸದಾವತು ॥ ೭ ॥**

ಯಾವ ಗುರುಗಳ ದೇಹವು ಪರಿಮಳಯುಕ್ತವಾಗಿ ಶ್ರೇಷ್ಠ ಲಕ್ಷಣಗಳಿಂದ ಕೂಡಿರುವುದೋ ಮತ್ತು ಯಾವ ಗುರುಗಳು ಶೇಷದೇವರಂತೆ ವಾಗ್ಮಿಗಳೆಂದು ಪ್ರಸಿದ್ಧರಾಗಿರುವರೋ ಅಂಥ ಶ್ರೀ ಕೃಷ್ಣಾಚಾರ್ಯರು ನಮ್ಮನ್ನು ರಕ್ಷಿಸಲಿ.

**ಸಮೀರ ಭಕ್ತಸಕ್ತೋಸೌ ಭಕ್ತಾನಾಂ ಭುಕ್ತಿ ಮುಕ್ತಿದಃ।**
**ದಯಾಬ್ಧಿರ್ಭಕ್ತ ಚಿತ್ತಜ್ಞಃ ಸ ಕೃಷ್ಣೋ ಮಾಂ ಸದಾವತು ॥ ೮ ॥**

ಯಾವ ದಯಾಳುಗಳಾದ ಗುರುಗಳು ಭಾರತೀಶನ ಭಕ್ತರಲ್ಲಿ ಆಸಕ್ತರಾಗಿ ಅವರಿಗೆ ಭಕ್ತಿ, ಮುಕ್ತಿಗಳನ್ನು ಕೊಡಿಸುವರೋ ಮತ್ತು ತಮ್ಮ ಭಕ್ತರ ಮನಸ್ಸನ್ನು ಚೆನ್ನಾಗಿ ಬಲ್ಲವರೆಂದು ಪ್ರಸಿದ್ಧರೋ ಅಂಥ ಶ್ರೀ ಕೃಷ್ಣಾಚಾರ್ಯರು ನಮ್ಮನ್ನು ರಕ್ಷಿಸಲಿ.

**ಯದಿದಂ ಕೃಷ್ಣ ಸಂಜ್ಞಸ್ಯ ಗುರೋಃ ಪ್ರೀತಿಕರಾಷ್ಟಕಂ।**
**ಶ್ರುಣುಯಾ ಛ್ರಾವಯೇದ್ಭಕ್ತ್ಯಾ ಪಠೇದ್ವಾಸು ಸಮಾಹಿತಃ ॥ ೯ ॥**

**ತಸ್ಯಬುದ್ಧಿರ್ವಿಹಂಗೇಶ ಪತೌ ವಾತಸುತೇ ತಥಾ।**
**ರಾಘವೇಂದ್ರ ಪದದ್ವಂದ್ವೇ ನಿಶ್ಚಲಾ ಭವತಿ ಧ್ರುವಂ ॥ ೧೦ ॥**

ಶ್ರೀ ಕೃಷ್ಣಾಚಾರ್ಯ ಗುರುವರ್ಯರಿಗೆ ಪ್ರಿಯವಾದ ಈ ಅಷ್ಟಕವನ್ನು ಯಾರು ಭಕ್ತಿಯಿಂದ ಹೇಳಿ, ಕೇಳುವಂತೆ ಮಾಡುವರೋ ಮತ್ತು ಏಕಾಗ್ರ

ಭಕ್ತಿಯಿಂದ ಪಾರಾಯಣ ಮಾಡುವವರೋ ಅಂಥ ಭಕ್ತರ ಬುದ್ಧಿಯು ಶ್ರೀ ರಾಘವೇಂದ್ರ ಸ್ವಾಮಿಗಳ ಮತ್ತು ವಾಯುಪುತ್ರ ಹನುಮಂತದೇವರ ಪಾದ ದ್ವಂದ್ವಗಳಲ್ಲಿ ನಿಶ್ಚಲವಾಗಿ ನಿಂತು ನಂತರ ಗರುಡಪತಿಯಾದ ಶ್ರೀಮನ್ನಾರಾಯಣನ ಚರಣಾರವಿಂದಗಳಲ್ಲಿ ಸ್ಥಿರವಾಗುವುದು.

**ಪುಣ್ಯಂ, ಪಾಪಹರಂ ಗುಹ್ಯಂ ಪವಿತ್ರಂ ಸರ್ವಸಾಧಕಂ।**
**ಆಯುಷ್ಯಂಚ ಯಶಸ್ಯಂಚ ಸರ್ವೋಪದ್ರವನಾಶನಂ ॥೧೧॥**

ಪುಣ್ಯಕರವೂ, ಪಾಪಹರವೂ, ಗೋಪ್ತವೂ ಮತ್ತು ಸಕಲ ಪುರುಷಾರ್ಥ ಪ್ರದವೂ ಆದ ಈ ಪವಿತ್ರತಮ ಸ್ತೋತ್ರವು ಭಕ್ತರಿಗೆ ಆಯಸ್ಸನ್ನೂ, ಯಶಸ್ಸನ್ನೂ ನೀಡಿ ಅವರ ಸರ್ವ ಉಪದ್ರವಗಳನ್ನೂ ಕಳೆಯುವ ಸಾಮರ್ಥ್ಯವನ್ನು ಹೊಂದಿದೆ.

**ತಸ್ಮಾತ್ಸರ್ವ ಪ್ರಯತ್ನೇನ ಯೇ ಪಠಂತಿ ದ್ವಿಜೋತ್ತಮಾಃ।**
**ಸರ್ವಾನ್ ಕಾಮಾನವಾಪ್ಯಾಂತೇ ಪ್ರಯಾಂತಿ ಹರಿಮಂದಿರಂ ॥೧೨॥**

ಆದ್ದರಿಂದ ಯಾವ ಭೂಸುರೋತ್ತಮರು ಈ ಸ್ತೋತ್ರವನ್ನು ಪ್ರಯತ್ನ ಪೂರ್ವಕವಾಗಿ ಪಾರಾಯಣ ಮಾಡುವವರೋ ಅಂತಹವರ ತಮ್ಮ ಸರ್ವಾಭೀಷ್ಟಗಳನ್ನು ಪಡೆದು ಅಂತ್ಯದಲ್ಲಿ ವೈಕುಂಠವನ್ನೇ ಸೇರುವರು.

**ಮಹಿಷಿ ಕೃಷ್ಣ ಸೂರೇಸ್ತು ಸೂನುನಾತ್ಯಲ್ಪ ಬುದ್ಧಿನಾಂ।**
**ಕೃಷ್ಣಾಯುಧಕರಾಹ್ವೇನಾ ರಚಿತಂ ಶ್ರೀ ಗುರೋರ್ಮುದೇ ॥**

ಈ ಸ್ತೋತ್ರವು ಮಹಿಷಿ ಕೃಷ್ಣಾಚಾರ್ಯರೆಂಬ ಪಂಡಿತರ ಪುತ್ರರೂ, ಅಲ್ಪಬುದ್ಧಿಯುಳ್ಳವರೂ ಆದ ಚಕ್ರಪಾಣಿಗಳಿಂದ ಗುರುಗಳ ಪ್ರೀತ್ಯರ್ಥವಾಗಿ ರಚಿಸಲ್ಪಟ್ಟಿತು.

**ಇತಿ ಶ್ರೀ ಮಹಿಷಿ ಚಕ್ರಪಾಣಿನಾ ವಿರಚಿತಂ ಶ್ರೀ ಇಭರಾಮಪುರೀ ನಿಲಯ ಶ್ರೀಮತ್ಕೃಷ್ಣಾರ್ಯ ಸ್ತೋತ್ರಂ ಸಂಪೂರ್ಣಂ**

**ಹೀಗೆ ಶ್ರೀ ಮಹಿಷಿ ಚಕ್ರಪಾಣಿಗಳಿಂದ ರಚಿತವಾದ ಶ್ರೀ ಇಭರಾಮಪುರೀ ನಿಲಯ ಶ್ರೀ ಕೃಷ್ಣಾರ್ಯ ಸ್ತೋತ್ರವು ಸಂಪೂರ್ಣವಾಯಿತು.**

**॥ ಶ್ರೀ ಮಧ್ವೇಶ ಕೃಷ್ಣಾರ್ಪಣಮಸ್ತು ॥**

❖ ❖ ❖